ಇನ್‌ಫರ್ಮೇಶನ್ ಕೊಟ್ಟಾರ ನೋಡ್ರಿ! ಇನ್ನೇನು—ಈಗೇನು ಮದಿವೀ ಮಾಡಿಕೊಳ್ಳಲಿಕ್ಕೆ ಬಂದಾರಲ್ಲ—ಈ ರಂಗಣ್ಣಾವರು, ರತ್ನಾಕರರಾಯರು ಇವರೊಳಗ ಗೆಳೆತನ ಇದ್ದದ್ದು ಖರೆ! ಆದರ ರಂಗಣ್ಣಾವರು ಈ ಸತ್ಯಾಗ್ರಹ ಪತ್ಯಾಗ್ರಹ ಮಾಡವರಲ್ಲ! ಹಳ್ಳೀ ಸುಧಾರಿಸೂ ಕೆಲಸಾ ಕೈಕೊಂಡು ಹೊರಟಾರ!'

'ಹೀಂಗೇನು? ಏನರೇ ಆಗಲಿ. ಆಸಾಮಿ ನಮ್ಮ ಕೈಗೆ ಸಿಕ್ಕಿತು. ಥ್ಯಾಂಕ್ಸ್ ದತ್ತೋಬಾ! ನಿನ್ನಿಂದ ನಮಗ ಬಹಾಳ ಉಪಯೋಗ ಆಯ್ತು! ಇಲ್ಲದಿದ್ದರ, ಪಾಪ! ಆ ಮ್ಯಾರೇಜ್ ಪಾರ್ಟಿಗೆ ನಮ್ಮಿಂದ ತೊಂದರಿ ಆಗ-ತಿತ್ತು!' ಅಂತ ಹೇಳಿ ಸಾಹೇಬರು ಕಾರು ತಿರುಗಿಸಿಕೊಂಡು ಆಫೀಸಿಗೆ ಹೊರಟು ಹೋದರು"

ರಂಗಣ್ಣ ದೀರ್ಘವಾಗಿ ನಿಟ್ಟುಸಿರನ್ನು ಹಾಕಿದ. ಆಗಲೇ ದೀನವದನ-ದಿಂದ ಗೋಪಾಲರಾಯರೂ, ಹಿರಿಯತನದ ಮುಖಮುದ್ರೆಯಿಂದ ಅನಂತ-ರಾಯರೂ ಅಲ್ಲಿಗೆ ಬಂದರು. ಅನಂತರಾಯರು ಸಲುಗೆಯ ದನಿಯಲ್ಲಿ ಹೇಳಿದರು:

"ಆಗಬೇಕಾದದ್ದು ಆಗಿ ಹೋಯ್ತು. ಇದೊಂದು ದಿವಸ ದಾಟಿ ಹೋಗಿದ್ದರ ಒಳ್ಳೇದಾಗತಿತ್ತು ಖರೇ! ಬೆರಕೀ ಪೋಲೀಸರು ಹ್ಯಾಂಗ ತಪಾಸ್ ಹಚ್ಯಾರೋ ಏನೋ ನೋಡ್ರಿ! ರತ್ನಾಕರರಾಯರೂ ಬಹಳ ಬುದ್ಧಿವಂತರು! ಹ್ಯಾಂಗ ಗದ್ದಲಾ ಏನೂ ಮಾಡದೆ, ಮಂಟಪದೊಳಗಿಂದ ಹೊರಬಿದ್ದು ಹೋಗ್ಯಾರ ನೋಡ್ರಿ! ಆಯ್ತು, ಇನ್ನೇನು ಮಾಡೂದದ? ಮದಿವೀ ಕೆಲಸ! ಮುಂದಿನ ವಿಧಿ-ವಿಧಾನ ಎಲ್ಲಾ ನಡೀಬೇಕು! ಇನ್ನ ಏಳ್ರಿ! ಹೀಂಗs ಕೂತರ ಹೊತ್ತಾಗತದ!"

ಅನಂತರಾಯರ ಮಾತಿನ ಔಚಿತ್ಯವನ್ನರಿತು, ರಂಗಣ್ಣ ಎದ್ದು, ಹಸೆ-ಜಗುಲಿಯ ಕಡೆಗೆ ಹೋದ. ಮಣೆಯ ಮೇಲೆ ಕುಳಿತುಕೊಂಡ. ಕಾವೇರಿಯೂ ಮತ್ತೆ ಬಂದು ಕುಳಿತುಕೊಂಡಳು. ಪುರೋಹಿತರು ವಿವಾಹಹೋಮವನ್ನು ಪ್ರಾರಂಭಿಸಿದರು. ಅಸ್ಖಲಿತ ಮಂತ್ರೋಚ್ಚಾರಣೆ ಪುರೋಹಿತರದು. ಕಾವೇರಿ ಆಗಾಗ ಕಳ್ಳನೋಟಗಳಿಂದ ರಂಗಣ್ಣನ ಗಂಭೀರಮುದ್ರೆಯ ಮುಖವನ್ನು ನಿಟ್ಟಿಸುತ್ತಿದ್ದಳು. ಇಂತಹ ಒಳ್ಳೆಯ ಪತಿ ದೊರೆತಿರುವನೆಂದು ಮನದ ಒಂದು

ಭಾಗ ಸಮಾಧಾನ ಪಡುತ್ತಲಿದ್ದರೆ, ಇಷ್ಟೆಲ್ಲ ಉಪಕಾರಮಾಡಿದ ರತ್ನಾಕರ ನನ್ನ ಅಗಲಬೇಕಾಯಿತಲ್ಲ—ಎಂದು ಇನ್ನೊಂದು ಭಾಗ ಅಸಮಾಧಾನದ ನಿಟ್ಟುಸಿರು ಚೆಲ್ಲುತ್ತಿತ್ತು. ಹೋಮದ ಕಾರ್ಯಕ್ರಮ ನಡೆದಿದ್ದಿತು.

ಕುಮುದೆಗೆ ರತ್ನಾಕರನ ಸುದ್ದಿಯನ್ನು ಇನ್ನಿಷ್ಟು ಕೇಳಬೇಕೆಂದು ಅಪೇಕ್ಷೆ. ಶಂಕರಣ್ಣನಿಂದ ಮತ್ತೆ ಮತ್ತೆ ಅದೇ ಸುದ್ದಿಯನ್ನು ಹೇಳಿಸಿ ಕೇಳುತ್ತಲಿದ್ದಳು. ಶಂಕರಣ್ಣ ಕೊನೆಗೆ ಹೇಳಿದ :

" ನಿಮಗs-ನಿಮ್ಮ ಕೈಯೊಳಗs—ಕೊಡಬೇಕಂತ, ರತ್ನಾಕರರಾಯರು ಒಂದು ಪದಾರ್ಥಾ ನನ್ನ ಕಡೆಗೆ ಕೊಟ್ಟಾರ ! ಹಾದಿಯೊಳಗ ಹೋಗತs ಹೋಗತs ಇರುವಾಗs ಗಡಬಡಿಯಿಂದ ಕೊಟ್ಟರು !"

ಕುತೂಹಲದಿಂದ ಕುಮುದಾ ಕೇಳಿದಳು :

" ಅದೇನು ಪದಾರ್ಥ ?"

ಶಂಕರಣ್ಣ ಜೇಬಿನೊಳಗಿಂದ ಒಂದು ಕರವಸ್ತ್ರವನ್ನು ತೆಗೆದು ಕುಮುದೆಯ ಮುಂದೆ ಇಟ್ಟ. ಇಡುವಾಗಲೇ ಹೇಳಿದ :

" ಈ ಕರವಸ್ತ್ರ ನಿಮ್ಮದs ಅಂತ ಅಲ್ರಿ ! ಇದನ್ನೇನೋ ಅವರಿಗೆ ನೀವು ಕೊಟ್ಟಿದ್ದಿರಂತ ! ' ಜೇಲಿನ ಜೀವನದೊಳಗ, ಇದರದೇನೂ ಉಪಯೋಗ ಆಗೂದಿಲ್ಲ ! ಅದಕ್ಕ, ಸದ್ಯ ಅವರದು ಅವರಿಗೆ ಮುಟ್ಟಿಸಿಬಿಡು ! ಅವರ ಹತ್ತರವೇ ಇದು ಇದ್ದು ಬಿಡಲಿ !' ಅಂತ ಹೇಳಿ, ಇದನ್ನ ನನ್ನ ಕಡೆ ಕೊಟ್ಟರರಿ !"

ಕುಮುದೆಯ ಕಂಠ ಒಮ್ಮೆಲೆ ಬಿಗಿದು ಬಂದಿತು. ಅವಳಿಗೆ ಗಟ್ಟಿಯಾಗಿ ಅತ್ತುಬಿಡಬೇಕೆನಿಸಿತು. ಈ ಮಂಟಪದಿಂದ ದೂರ—ಬಹುದೂರ—ಎಲ್ಲಿಗಾದರೂ ಹೊರಟುಹೋಗಬೇಕೆಂಬ ವಿಚಾರ ಮೂಡಿತು. ಆಗಲೇ ಪುರೋಹಿತರು ಹೇಳಿದರು :

" ಗಂಡಿನ ಕಡೆಯ ಕಳಸಗಿತ್ತಿನ್ನ ಕರೀರಿ !"

ವೇಣಕ್ಕ ಕರೆದರು :

"ಕುಮುದಾ ! ಕುಮುದಾ !"

ಬಂದ ದುಃಖವನ್ನು ನುಂಗಿಕೊಂಡು ಕುಮುದಾ, ಹಸೆಜಗುಲಿಯ ಬಳಿ ಹೋದಳು. ಪುರೋಹಿತರು ವಧೂವರರಿಗೆ ಆರತಿಮಾಡುವಂತೆ ಹೇಳಿದರು. ಕಾವೇರಿಯ ತಂಗಿಯೊಂದಿಗೆ ಕುಮುದಾ ಆರತಿಯನ್ನು ತೆಗೆದುಕೊಂಡಳು. ತಾಸೇ-ಬಜಂತ್ರಿ ಮೊರೆಯತೊಡಗಿದುವು. ಮುತ್ತೈದೆಯರಿಬ್ಬರು, ಜೊತೆಗೂಡಿ ಆರತಿಯ ಹಾಡು ಹೇಳಲು ತೊಡಗಿದರು :

" ರಂಗಧಾಮನ ನೋಡಿರೇ—ಜಯ-ಮಂಗಲಾರತಿ ಪಾಡಿರೇ !<br>
ಮಂಗಲಾಂಗಿ ರಾಧಾರಮಣಿಯ ಸುಖ-<br>
ಸಂಗಮಗೊಂಡಿಹ ನೋಡಿರೆ !<br>
ರಂಗಧಾಮನ ನೋಡಿರೇ—ಜಯ-ಮಂಗಲಾರತಿ ಪಾಡಿರೆ ! "

ಕುಮುದಾ, ಕಾವೇರಿ-ರಂಗಣ್ಣರಿಗೆ ಆರತಿಬೆಳಗುತ್ತಿದ್ದಳು. ರಂಗಣ್ಣ ದೈನ್ಯದಷ್ಟಿಗಳಿಂದ ಕುಮುದೆಯನ್ನು ನಿಟ್ಟಿಸುತ್ತಲಿದ್ದ.

**ಓಂ ಶಾಂತಿಃ ಶಾಂತಿಃ ಶಾಂತಿಃ !**



# 'ಆನಂದಕಂದ'ರ ಬೇರೆ ಗ್ರಂಥಗಳು

ಕವನಸಂಕಲನ

ಮುದ್ದಣನಮಾತು
ಅರುಣೋದಯ
ವಿರಹಿಣಿ
ಒಡನಾಡಿ
ಕಾರಹುಣ್ಣಿವೆ

ಕಥಾಸಂಕಲನಗಳು

ಬಡತನದಬಾಳು
ಸಂಸಾರ ಚಿತ್ರ
ನಮ್ಮ ಬದುಕು
ಮಾತನಾಡುವ ಕಲ್ಲು

ಕಾದಂಬರಿಗಳು

ಸುದರ್ಶನ
ರಾಜಯೋಗಿ
ಅಶಾಂತಿಪರ್ವ
ಕುಮುದಾ (ಬರಲಿದೆ)

ಇತರ

ಬೆಳವಡಿ ಮಲ್ಲಮ್ಮ (ನಾಟಕ ಸಂಕಲನ)
ಭಾಗೀರಥಿ (ಸಂಗೀತರೂಪಕ)
ಬೆಂದ ಹೃದಯ (ಸಾಮಾಜಿಕ ರೂಪಕ ಸಂಕಲನ)
ಕರ್ನಾಟಕ ಜನಜೀವನ (ಸಂಸ್ಕೃತಿ ಸಂಶೋಧನ ಗ್ರಂಥ)
ಭಾವಗೀತ (ಭಕ್ತಿಗೀತ ಸಂಕಲನ)
ಶ್ರೀಬಸವಣ್ಣನವರು (ಮಕ್ಕಳಿಗಾಗಿ ಚರಿತ್ರ)
ಹಳ್ಳಿಗರ ಹಾಡುಗಳು (ವಿಮರ್ಶಾತ್ಮಕ ಪ್ರಬಂಧ)

## ಬೇಗನೆ ಪ್ರಕಟವಾಗಲಿರುವ ಗ್ರಂಥಗಳು

ಸಾಮಾಜಿಕನ ಸಂವಚನ (ವಿಚಾರತರಂಗಿಣಿ)
ಜಾನಪದ ಸಾಹಿತ್ಯಮಂಥನ (ವಿಮರ್ಶಾ ಪ್ರಬಂಧಗಳು)
ಸಾಹಿತ್ಯವಿಮರ್ಶೆ (ಪ್ರಬಂಧ ಸಂಕಲನ)
ಸಮಾಜದರ್ಶನ (ಸಾಮಾಜಿಕ ಪ್ರಬಂಧ ಸಂಕಲನ)
ಹೃದಯವೀಣೆ (ಗೀತ ಸಂಕಲನ)